# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114

5ನೇ ವರ್ಷ 36ನೇ ಸಂಚಿಕೆ ಕೊಪ್ಪ 31-5-1987 ಭಾನುವಾರ ಬೆಲೆ 50 ಪೈಸೆ




# ಜಿಲ್ಲಾ ಪರಿಷತ್ 'ನಾಮಕಾವಾಸ್ತೆ':

## ಜಿಲ್ಲಾ ಪರಿಷತ್ ಸದಸ್ಯ ರಾಮಪ್ಪಯ್ಯ ಟೀಕೆ

(ನಮ್ಮ ಪ್ರತಿನಿಧಿಯಿಂದ)

**ಶೃಂಗೇರಿ: ಜಿಲ್ಲಾ ಪರಿಷತ್ತು ತನ್ನ ಘೋಷಿತ ಗುರಿಯಾದ ಆಡಳಿತ ವಿಕೇಂದ್ರೀಕರಣವನ್ನು ಯಾವ ರೀತಿಯಲ್ಲೂ ಸಾಧಿಸಲಾಗದೆ ಇಂದು ಕೇವಲ ನಾಮಕಾವಾಸ್ತೆ ಮಟ್ಟಕ್ಕೆ ಇಳಿದಿದೆ ಎಂದು ಈ ಕ್ಷೇತ್ರದ ಜಿ. ಪ. ಸದಸ್ಯ ಕೆ.ವಿ ರಾಮಪ್ಪಯ್ಯ ಟೀಕಿಸಿದ್ದಾರೆ.**

ಜಿಲ್ಲಾ ಪರಿಷತ್‌ಗಳ ಆಯವ್ಯಯ ಮುಂಗಡ ಪತ್ರವನ್ನು ಪರಿಷತ್‌ಗಳೇ ಸಿದ್ಧಪಡಿಸುವ ಬದಲು ರಾಜ್ಯ ಸರ್ಕಾರವೇ ಆ ಕೆಲಸ ಮಾಡಿದೆ. ಈ ಹಸ್ತಕ್ಷೇಪವನ್ನು ನಾವು ಆಕ್ಷೇಪಿಸದೆ ತಾಳಿಕೊಂಡೆವು.

ಆದರೆ ಮಂಡಲ ಪಂಚಾಯ್ತಿ ಕಾರ್ಯದರ್ಶಿಗಳನ್ನು ಪರಿಷತ್ತುಗಳೇ ನೇಮಿಸಬೇಕೆಂದಿದ್ದರೂ ಸರ್ಕಾರವೇ ನೇಮಿಸುತ್ತಿರುವುದು ಪರಿಷತ್ತುಗಳ ನಾಮಕಾವಾಸ್ತೆ ಸ್ಥಿತಿಗೆ ಸ್ಪಷ್ಟ ಕುರುಹಾಗಿದೆ ಎಂದು ಅವರು ಹೇಳಿದ್ದಾರೆ.

ಇದಲ್ಲದೆ ಪರಿಷತ್ತಿನ ಕಾರ್ಯಕಲಾಪ ಅಸ್ತವ್ಯಸ್ತವಾಗಿದೆ. ಯಾವುದೇ ವ್ಯವಸ್ಥಿತ ಕೆಲಸಗಳನ್ನೂ ಮಾಡದ ಪರಿಷತ್ ಅಧ್ಯಕ್ಷರು ನಿರ್ದಿಷ್ಟವಾದ ಕಾರ್ಯಭಾರಗಳಿಲ್ಲದಿದ್ದರೂ ಜಿಲ್ಲಾದ್ಯಂತ ಪ್ರವಾಸ ಮಾಡುತ್ತಿದ್ದು ಇದಕ್ಕಾಗಿ ಅಪಾರ ಹಣ ವೆಚ್ಚ ಮಾಡಿದ್ದಾರೆ. ಇನ್ನೂ ಮಾಡುತ್ತಿದ್ದಾರೆ. ಇದು ಅವರ ಲೆಕ್ಕದಲ್ಲಿ 11 ಸಾವಿರ ರೂ. ಗಳಾದರೆ, ನಮ್ಮ (ಕಾಂಗ್ರೆ) ಲೆಕ್ಕದಲ್ಲಿ 18 ಸಾವಿರ ಆಗಿದೆ ಎಂದೂ ಅವರು ಆಪಾದಿಸಿದ್ದಾರೆ.

## ಕ್ರೀಡಾ ಹಾಸ್ಟೆಲ್‌ಗೆ ೨೪ ಲಕ್ಷ ರೂ.

**ಚಿಕ್ಕಮಗಳೂರು:** ಕೆಮ್ಮಣ್ಣುಗುಂಡಿಯಲ್ಲಿ ಕ್ರೀಡಾ ಹಾಸ್ಟೆಲ್ ನಿರ್ಮಿಸಲು ಕೇಂದ್ರ ಸರ್ಕಾರ ೨೪ ಲಕ್ಷ ರೂ. ಮಂಜೂರು ಮಾಡಿದ್ದು ರಾಜ್ಯ ಸರ್ಕಾರ ಈ ಹಾಸ್ಟೆಲ್ ನಿರ್ಮಾಣಕ್ಕೆ ಭೂಮಿ ನೀಡಿದ ತಕ್ಷಣ ಹಣ ಬಿಡುಗಡೆ ಆಗುವುದಾಗಿ ವರದಿಯಾಗಿದೆ.

## ಕೇರಂ ಟೂರ್ನಿ ಫಲಿತಾಂಶ

**ಕೊಪ್ಪ:** ಯುವಜನ ಸೇವಾ ಇಲಾಖೆ ಮತ್ತು ಸರ್ವೋದಯ ಯುವಕ ಸಂಘಗಳ ಸಂಯುಕ್ತ ಆಶ್ರಯದಲ್ಲಿ ಕೊಪ್ಪ, ತೀರ್ಥಹಳ್ಳಿ ಮತ್ತು ಶೃಂಗೇರಿ ತಾಲ್ಲೂಕುಗಳ ಮಟ್ಟದ ಕೇರಂ ಟೂರ್ನಿಯಲ್ಲಿ ಡಬಲ್ಸ್‌ನಲ್ಲಿ ಕೊಪ್ಪದ ಇಮ್ತಿಯಾಜ್ ಮತ್ತು ರಿಯಾಜ್ ಪ್ರಥಮ ಸ್ಥಾನವನ್ನೂ ಕೋಣಂದೂರಿನ ಕೆ.ಎಂ. ಸುರೇಶ್, ರಂಗಪ್ಪ ದ್ವಿತೀಯ ಸ್ಥಾನವನ್ನೂ, ಸಿಂಗಲ್ಸ್‌ನಲ್ಲಿ ಕೊಪ್ಪದ ಇಮ್ತಿಯಾಜ್ ಪ್ರಥಮ. ಕೊಪ್ಪದ ಫ್ರಾನ್ಸಿಸ್ ಪಿಂಟೋ ದ್ವಿತೀಯ ಸ್ಥಾನವನ್ನೂ ಗಳಿಸಿದ್ದಾರೆ.

ಈ ಸ್ಪರ್ಧೆಗಳಲ್ಲಿ ಸುಮಾರು 65ಕ್ಕೂ ಹೆಚ್ಚು ಜನ ಡಬಲ್ಸ್‌ನ 21 ತಂಡ ಹಾಗೂ ಸಿಂಗಲ್ಸ್‌ನ 28 ತಂಡಗಳಲ್ಲಿ ಭಾಗವಹಿಸಿದ್ದರು.

ಈ ಸ್ಪರ್ಧೆಗಳು ಯಶಸ್ವಿಯಾಗಲು ಸಹಕರಿಸಿದ ಎಲ್ಲರಿಗೂ ಸರ್ವೋದಯ ಯುವಕ ಸಂಘ ವಂದನೆ ಸಲ್ಲಿಸಿದೆ.

## ದೈಹಿಕ ಶಿಕ್ಷಕರ ಸಭೆ

**ಕಡೂರು:** ಜಿಲ್ಲೆಯಲ್ಲಿ ದೈಹಿಕ ಶಿಕ್ಷಣ ತರಬೇತಿ ಪಡೆದವರ ಸಭೆ ಕಡೂರಿನಲ್ಲಿ ಈಚೆಗೆ ನಡೆಯಿತು.

200 ವಿದ್ಯಾರ್ಥಿಗಳು ಅಥವಾ 5 ಮಂದಿ ಶಿಕ್ಷಕರು ಇರುವ ಎಲ್ಲಾ ಶಾಲೆಗಳಿಗೂ ಈಗಾಗಲೇ ಮಂತ್ರಿಗಳು ಒಪ್ಪಿ ಕೊಂಡಿರುವಂತೆ ಒಬ್ಬ ದೈಹಿಕ ಶಿಕ್ಷಕರನ್ನು ನೇಮಿಸಿ, ಅದಕ್ಕಾಗಿ ಸಂದರ್ಶನವನ್ನು ಜಿಲ್ಲಾ ನೇಮಕಾತಿ ಸಮಿತಿಯ ಸಂದರ್ಶನದ ಜೊತೆಯಲ್ಲೇ ಏರ್ಪಡಿಸಬೇಕೆಂದು ಒತ್ತಾಯಿಸಲಾಯಿತು.

ನಾಯಿಕೊಡೆಗಳಂತೆ ದೈಹಿಕ ಶಿಕ್ಷಣ ತರಬೇತಿ ನೀಡುವ ಸಂಸ್ಥೆಗಳು ಹುಟ್ಟಿಕೊಳ್ಳುತ್ತಿರುವುದಕ್ಕೆ ಕಳವಳ ವ್ಯಕ್ತಪಡಿಸಿ, ಇಂಥ ಶಾಲೆಗಳ ಸ್ಥಾಪನೆಗೆ ಅನುಮತಿ ನೀಡದಿರಲು ಒತ್ತಾಯಿಸಲಾಯಿತು.

## ಶಾಂತಿಗ್ರಾಮದಲ್ಲಿ ಕುಡಿಯುವ ನೀರಿಗೆ ತೊಂದರೆ

(ವರದಿ: ಎಂ. ವಿ. ಗಂಗಾಧರ್)

ಶಾಂತಿಗ್ರಾಮ: ಇಲ್ಲಿನ ನಾಗರಿಕರಿಗೆ ನೀರು ಪಡೆಯಲು ಬವಣೆಯಾಗಿದೆ. ಅನೇಕ ವರ್ಷಗಳ ಹಿಂದೆ ನೀರಿನ ಅಗತ್ಯದ ಬಗ್ಗೆ ಸರ್ಕಾರದ ಗಮನ ಸೆಳೆದಿದ್ದು, ಪೂರೈಕೆ ವ್ಯವಸ್ಥೆ ಮಾಡಿದ್ದರೂ ಅದು ಸಫಲತೆ ಹೊಂದಿಲ್ಲವಾಗಿ, ನೀರಿನ ಸಮಸ್ಯೆ ವಿಪರೀತವಾಗಿದೆ ಎಂದು ನಾಗರಿಕರು ತಿಳಿಸಿದ್ದಾರೆ. ಸರ್ಕಾರ ಕೂಡಲೇ ಗಮನಹರಿಸಿ ನಿವಾರಿಸಬೇಕೆಂದು ಒತ್ತಾಯಿಸಿದ್ದಾರೆ.

## ವಿದ್ಯುತ್ ದರ ಏರಿಕೆ ವಿರೋಧಿಸಿ ಹರಿಹರಪುರ ಬಂದ್

ಹರಿಹರಪುರ: ರಾಜ್ಯ ಬಿ.ಜೆ.ಪಿ. ಕರೆಯ ಮೇರೆಗೆ, ವಿದ್ಯುತ್ ದರ ಏರಿಕೆಯ ವಿರುದ್ಧ ಇಲ್ಲಿನ ಬಿಜೆಪಿ ಘಟಕದ ನೇತೃತ್ವದಲ್ಲಿ ಮೇ 26ರಂದು ಬಂದ್ ಆಚರಿಸಲಾಯಿತು. ಬೆಳಗಿನಿಂದ ಸಂಜೆ 4 ಗಂಟೆಯವರೆಗೆ ಅಂಗಡಿ, ಹೋಟೆಲ್‌ಗಳಾವುವೂ ತೆರೆಯದೆ ಎಲ್ಲಾ ವ್ಯವಹಾರ ಸ್ಥಗಿತಗೊಂಡಿತ್ತು. ಸಂಜೆ ನಡೆದ ಸಾರ್ವಜನಿಕ ಸಭೆಯಲ್ಲಿ ಬಿ.ಎಂ. ರಘುನಾಥ್, ಡಾ|| ಶೇಷಗಿರಿ ವಿದ್ಯುತ್ ದರ ಏರಿಕೆಯನ್ನು ಖಂಡಿಸಿ ಮಾತನಾಡಿದರು.

ಮೇ 22ರಂದು ವಿಧಾನ ಪರಿಷತ್ ಉಪಾಧ್ಯಕ್ಷ ಮಲ್ಲಿಕಾರ್ಜುನಯ್ಯ ಇಲ್ಲಿಗೆ ಭೇಟಿ ನೀಡಿ ಸಾರ್ವಜನಿಕ ಕುಂದು ಕೊರತೆಗಳ ಬಗ್ಗೆ ನಾಗರಿಕರೊಂದಿಗೆ ವಿಚಾರಣೆ ನಡೆಸಿದರು.

## ಬಾಲವಾಡಿ ಶಿಕ್ಷಣ ತರಬೇತಿ ಪಡೆದ ನಿರುದ್ಯೋಗಿಗಳ ಬೇಡಿಕೆ ಈಡೇರಿಕೆಗೆ ಉಪವಾಸ ಸತ್ಯಾಗ್ರಹ

ಬೆಂಗಳೂರು: ಕಳೆದ 8-10 ವರ್ಷಗಳಿಂದ ಪೂರ್ವ ಪ್ರಾಥಮಿಕ (ಬಾಲವಾಡಿ) ಶಿಕ್ಷಣದ ತರಬೇತಿ ಪಡೆದ ಸುಮಾರು 10 ಸಹಸ್ರ ಮಹಿಳೆಯರು ಇನ್ನೂ ನಿರುದ್ಯೋಗಿಗಳಾಗಿ ಕೊಳೆಯುತ್ತಿದ್ದು, ಅವರ ಸಮಸ್ಯೆ ನಿವಾರಿಸಲು ಕೋರಿ ಸರ್ಕಾರಕ್ಕೆ ಸಲ್ಲಿಸಿದ ಮನವಿಗಳು, ಪ್ರತಿಭಟನೆಗಳು, ಯಾವುದೂ ಪ್ರಯೋಜನವಾಗಿಲ್ಲ.

ಈ ಹಿಂದೆ ಪ್ರಾಥಮಿಕ ಶಾಲಾ ಶಿಕ್ಷಕರ ಜೊತೆಗೇ ಬಾಲವಾಡಿ ಶಿಕ್ಷಕಿಯರ ನೇಮಕವೂ ಆಗುತ್ತಿತ್ತು. ನಾಲ್ಕೈದು ವರ್ಷಗಳಿಂದ ಇವರ ನೇಮಕವೇ ನಿಂತು ಹೋಗಿದೆ. ಅಲ್ಲದೆ ಗುತ್ತಿಗೆ ಆಧಾರದ ಶಿಕ್ಷಕರನ್ನು ಕಳೆದ ವರ್ಷ ಖಾಯಂಗೊಳಿಸಿ ಅದೇ ಆಧಾರದ ಈ ಶಿಕ್ಷಕಿಯರನ್ನು ಮನೆಗೆ ಕಳಿಸಲಾಗಿದೆ.

ಈ ಎಲ್ಲ ಅನ್ಯಾಯಗಳನ್ನು ನಿವಾರಿಸಿಕೊಂಡು ನ್ಯಾಯ ದೊರಕಿಸಿಕೊಳ್ಳುವ ಸಲುವಾಗಿ ರಾಜ್ಯದ ಎಲ್ಲಾ ಕಡೆಗಳ ಬಾಲವಾಡಿ ತರಬೇತಾದ ಶಿಕ್ಷಕಿಯರ ಸಮ್ಮೇಳನವನ್ನು ಜೂನ್ 8ರಂದು ಕಬ್ಬನ್ ಪಾರ್ಕ್‌ನಲ್ಲಿ ಏರ್ಪಡಿಸಿದೆ. ಅಂದು ಮುಖ್ಯ ಮಂತ್ರಿಗಳಿಗೆ ಮನವಿ ಸಲ್ಲಿಸಿ, ಬೇಡಿಕೆಗಳು ಈಡೇರದಿದ್ದರೆ ಅಂದಿನಿಂದಲೇ ಉಪವಾಸ ಸತ್ಯಾಗ್ರಹ ಕೈಗೊಳ್ಳಲೂ ನಿರ್ಧರಿಸಿರುವುದಾಗಿ ಈ ಶಿಕ್ಷಕಿಯರ ರಾಜ್ಯ ಸಂಘದ ಪ್ರಕಟಣೆ ತಿಳಿಸಿದೆ.

## ಶಂಕರ್ ಸಾರಿಗೆ ಸಂಸ್ಥೆ ಕಾರ್ಮಿಕರ ಧರಣಿ, ಉಪವಾಸ ಸತ್ಯಾಗ್ರಹ ಮುಂದೂಡಿಕೆ

**ಕೊಪ್ಪ:** ಇಲ್ಲಿನ ಶಂಕರ್ ಸಾರಿಗೆ ಸಂಸ್ಥೆಯ ಮಾಲೀಕರು ಕಾರ್ಮಿಕರ ಬೇಡಿಕೆಗಳನ್ನು ಈಡೇರಿಸದಿರುವುದನ್ನು ಪ್ರತಿಭಟಿಸಿ ಜೂನ್ 1ರಿಂದ ಆರಂಭಿಸಬೇಕೆಂದು ನಿರ್ಧರಿಸಿದ್ದ ಧರಣಿ ಮತ್ತು ಉಪವಾಸ ಸತ್ಯಾಗ್ರಹವನ್ನು ಜೂನ್ 10ರವರೆಗೆ ಮುಂದೂಡಿರುವುದಾಗಿ ಕಾರ್ಮಿಕರ ಸಂಘದ ಕಾರ್ಯದರ್ಶಿ ಸಂಜೀವ ತಿಳಿಸಿದ್ದಾರೆ.

ಸಂಸ್ಥೆಯ ಉನ್ನತ ಹುದ್ದೆಯೊಂದಕ್ಕೆ ನೇಮಕವಾಗಿರುವ ನಿವೃತ್ತ ಸಹಾಯಕ ಕಾರ್ಮಿಕ ಕಮಿಶನರ್ ನಂಜುಂಡಯ್ಯನವರು ಮೇ 25ರಂದು ಕಾರ್ಮಿಕ ಸಂಘದ ಮುಖಂಡರನ್ನು ಭೇಟಿ ಮಾಡಿ, ತಾನು ಜೂನ್ 1ರಂದು ತನ್ನ ಹುದ್ದೆ ವಹಿಸಿಕೊಳ್ಳಲಿದ್ದು, ಕಾರ್ಮಿಕರ ಸಮಸ್ಯೆಗಳನ್ನು ಪರಿಶೀಲಿಸಿ ಕಾನೂನು ಚೌಕಟ್ಟಿನಲ್ಲಿ ಅವುಗಳನ್ನು ಬಗೆಹರಿಸಲು ಪ್ರಾಮಾಣಿಕ ಕ್ರಮ ಕೈಗೊಳ್ಳುವುದಾಗಿಯೂ, ತನಗೆ 10 ದಿನ ಕಾಲಾವಕಾಶಕೊಡಬೇಕೆಂದೂ ಕೇಳಿದ್ದರಿಂದ ಸತ್ಯಾಗ್ರಹ ಮುಂದೂಡಲು ಸಂಘ ನಿರ್ಧರಿಸಿರುವುದಾಗಿ ಸಂಜೀವ ಹೇಳಿದ್ದಾರೆ.

## ಶೃಂಗೇರಿ ಜೇಸೀಸ್‌ಗೆ ಪ್ರಶಸ್ತಿ

ಶೃಂಗೇರಿ: ಇತ್ತೀಚೆಗೆ ದಾವಣಗೆರೆಯಲ್ಲಿ ನಡೆದ ಕರ್ನಾಟಕ ರಾಜ್ಯ ಜೇಸೀಸ್‌ನ ಎರಡನೆಯ ಪ್ರಾದೇಶಿಕ ಸಮ್ಮೇಳನದಲ್ಲಿ ಶೃಂಗೇರಿ ಜೇಸೀಸ್ ಐದು ಪ್ರಶಸ್ತಿಗಳನ್ನು ಪಡೆಯಿತು. ಶೃಂಗೇರಿ ಜೇಸೀಸ್ ಅಧ್ಯಕ್ಷ ಯು. ಶಾಂತಮೂರ್ತಿ ವಿತಾಳ್ ವಲಯ 'ಎಚ್'ನ 'ಅತ್ಯುತ್ತಮ ಘಟಕ ಅಧ್ಯಕ್ಷ' ಎಂಬ ಪುರಸ್ಕಾರ ಪಡೆದರು. ಪ್ರಥಮ ನೋಂದಣಿ, ಹೆಚ್ಚು ಪ್ರತಿನಿಧಿಗಳು ಹಾಗೂ ಮಾನವ-ದೂರ ಪ್ರಶಸ್ತಿಗಳನ್ನೂ ಶೃಂಗೇರಿ ಜೇಸೀಸ್ ತನ್ನದಾಗಿಸಿಕೊಂಡಿತು.

ನರಸಿಂಹರಾಜಪುರ ತಾಲ್ಲೂಕಿನ ಮಂಡಲ ಪ್ರಧಾನರು—1.

ಸೀತೂರು ಮಂಡಲ

# ಸಿಡುಕಿಲ್ಲದ ಬಡಕಲು, ಗೋಪಾಲಕ— ನಲ್ಲದ ಗೋಪಾಲ ರಾವ್

[ಪ್ರಿಯ ಓದುಗರೆ,

ಈ ವಾರದಿಂದ ಎಂ. ಐ. ಶ್ರೀನಿವಾಸ ಮೂರ್ತಿಯವರು ನರಸಿಂಹರಾಜಪುರ ತಾಲ್ಲೂಕಿನ ಹೊಸ ಮಂಡಲ ಪ್ರಧಾನರುಗಳ ಪರಿಚಯವನ್ನು ನಿಮಗೆ ಮಾಡಿಕೊಡುತ್ತಾರೆ. ಆದರೆ ಅದನ್ನು ನೇರವಾಗಿ ಮಾಡ(ಲಾರ)ದೆ, ದಪ್ಪನೆಯ ತಮ್ಮ 'ಅಣಕನ್ನಡಕ'ದ ಮೂಲಕ ಕಂಡಂತೆ ಮಾಡುತ್ತಾರೆ. ಈ ಕನ್ನಡಕ ತೆಗೆದಾಗ ಕಂಡದ್ದನ್ನೂ ಹೇಳುತ್ತಾರೆ.

ನಮ್ಮ ಪತ್ರಿಕೆಯ ಮಟ್ಟಿಗೆ ಇಂಥದು ನಮ್ಮ ಮೊದಲ ಪ್ರಯತ್ನ. ನಮ್ಮ ಪತ್ರಿಕೆಯ ಬೇರೆಲ್ಲ ವರದಿ, ಬರಹಗಳಂತೆ ಇದು ಕೂಡ ಯಾವುದೇ ರೀತಿ ಕುಹಕವಿಲ್ಲದ್ದು. ಲಘು ಹಾಸ್ಯ, ತಿಳಿ ಅಣಕದ ಕೀಸುಳಿಯಿಂದ, ಅಂಕು ಡೊಂಕುಗಳಿದ್ದರೆ ನಯಗೊಳಿಸಿ ಅಂದ ಕೊಡುವ, ಅಥವಾ ಅಂಕು-ಡೊಂಕು ಸ್ವಲ್ಪ ಮರೆಯಾಗಿದ್ದರೆ ಅದಕ್ಕೆ ಸ್ವಲ್ಪ ಬೆಳಕು, ಸ್ವಲ್ಪವೇ ಭೂತಕನ್ನಡಿ ಹಿಡಿಯುವ ಪ್ರಯತ್ನವೇ ಎಲ್ಲ 'ವಾರೆ ನೋಟ'ಗಳ ಉದ್ದೇಶ. ನಮ್ಮದೂ ಅಷ್ಟೆ. ಇದಕ್ಕೆ ನಿಮ್ಮ ಸಹೃದಯ ಪ್ರತಿಕ್ರಿಯೆಗೆ ಸದಾ ಸ್ವಾಗತ.

—ಸಂ.]

ಸೀತೂರು ದೊಡ್ಡ ಮನೆಯ ಎಸ್. ಡಿ. ವಿ. ಗೋಪಾಲರಾವ್ 50ರ ಹರಯದವರು. ಹತ್ತನೇ ತರಗತಿಗೆ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ತಂದೆಯ ವೃತ್ತಿ ವ್ಯವಸಾಯವನ್ನೇ ಅವಲಂಬಿಸಿದ ಇವರು 1955ರಲ್ಲಿ ಶ್ರೀ ವಿನಾಯಕ ಯುವಕ ರೈತ ಸಂಘ ಕಟ್ಟಿ ಆ ಮೂಲಕ ಸಾರ್ವಜನಿಕ ಸೇವೆಗೆ ಪಾದಾರ್ಪಣ ಮಾಡಿದರು. ಆ ಲಾಗಾಯ್ತು 1977ರವರೆಗೆ ಸೇವಾ ಸಹಕಾರ ಸಂಘ, ಗ್ರಾಮ ಪಂಚಾಯ್ತಿ, ಕೃಷಿ ಅಭಿವೃದ್ಧಿ ಬ್ಯಾಂಕ್, ತಾ॥ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ಮತ್ತು ಅನೇಕ ಧಾರ್ಮಿಕ ಸಂಸ್ಥೆಗಳಲ್ಲಿ ಸದಸ್ಯರು-ಅಧ್ಯಕ್ಷರೂ ಆಗಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಇಂದಿನ ಮಂಡಲ ಪಂಚಾಯ್ತಿಯ ಅಧ್ಯಕ್ಷರಾಗಿ ಅವಿರೋಧ ಆಯ್ಕೆಗೊಂಡ ಶ್ರೀಯುತರಿಗೆ ಈ ಮಂಡಲದ ಜನತೆಯ ಜೊತೆಗೆ ಶುಭ ಕೋರಿ ಮುಂದುವರಿಯುತ್ತಾ....

ಸೀತೂರಿನ ಅನೇಕ ಸಂಘ-ಸಂಸ್ಥೆಗಳ ಪ್ರತ್ಯಕ್ಷವಲ್ಲದಿದ್ದರೂ ಪರೋಕ್ಷವಾಗಿಯಾದರೂ 'ಸೃಷ್ಟಿಕರ್ತ' ಬಡ ಬ್ರಾಹ್ಮಣ(ಮೊದಲು ಆರ್ಥಿಕವಾಗಿ, ಈಗ ಆರ್ಥಿಕವಾಗಿ ಅಲ್ಲದಿದ್ದರೂ ಶಾರೀರಿಕವಾಗಿ) ದೊಡ್ಡ ಮನೆ(ನ) ಗೋಪಾಲ ರಾವ್‌ಗ ಸೀತೂರು ಜನತೆಯ ಸೇವೆಗೆ ಇತ್ತೀಚಿನ ವರ್ಷಗಳಲ್ಲಿ ಕಾಲಾವಕಾಶಗಳೇ ಇಲ್ಲವೆನ್ನುವ ಕಾಲಕ್ಕೆ ಕಾಲವೇ ಕೂಡಿ ಬಂದು ಮಂಡಲದ ಸದಸ್ಯ — ಪ್ರಧಾನರಾದದ್ದು ರಾಜ(ಕೀಯ) ಯೋಗ ಎನ್ನುವ ಜನಕ್ಕೆ ಸತ್ಯ. ವಿದ್ಯೆಯಲ್ಲಿ ಸೋತರೂ ಬುದ್ಧಿಯಲ್ಲಿ ಗೆದ್ದು, ಇಂದಿನ (ಅ)ನ್ಯಾಯವಾದಿಗಳಿಗಿಂತಲೂ ಚೆನ್ನಾಗಿ ಕಾನೂನನ್ನು ಅರೆದು ಕುಡಿದಂತಿರುವ ಈ ಕೆಡುಕಲ್ಲದ ಬಡಕಲು ವ್ಯಕ್ತಿ, ಬಲವಿಲ್ಲದಿದ್ದರೂ ಛಲವಿದ್ದು ಹಿಡಿದ ಕೆಲಸವನ್ನು ಸಾಧಿಸುವ ಅಚಲ ಶ್ರದ್ಧೆಯಿದ್ದವರು. ತಾಲ್ಲೂಕಿರಲಿ ಜಿಲ್ಲೆಯ ಸರ್ಕಾರಿ/ಅರೆ ಸರ್ಕಾರಿ ಸಂಘ-ಸಂಸ್ಥೆಗಳಲ್ಲಿ ನಾಮಕರಣ ಸದಸ್ಯರಾಗಿಯಾದರೂ ಇರಬೇಕಾಗಿದ್ದ ವ್ಯಕ್ತಿ ರಾಜಕೀಯ ದೊಂಬರಾಟದ ತಳ ಸೇರಿದ್ದು, ತಡವಾಗಿಯಾದರೂ ಜನರಿಂದಲೇ ನಾಮಕರಣಗೊಂಡದ್ದು ಸಖೇದಾಶ್ಚರ್ಯವಲ್ಲ!

ಈ ಮಂಡಲದ ವಿಶೇಷತೆ ಎಂದರೆ, ಎಲ್ಲಾ ಜಾತಿ-ವರ್ಗದ ಜನ ನೋಡಬೇಕಾದರೆ ಈ ಮಂಡಲಕ್ಕೆ ಬರಬೇಕು. ಬಡಜನ ಬಹುತೇಕ, ಮಿಕ್ಕಿದ್ದರಲ್ಲಿ ಮಧ್ಯಮ ಮುಕ್ಕಾಲು ಭಾಗ, ಶ್ರೀಮಂತ ಕೆಲ ಭಾಗ— ಹೀಗೆ, ಈ ಗೋಪಾಲರಾಯರ ಶರೀರದಂತೆ ಬೆಳೆದುಕೊಂಡಿದೆ. ಈ ಒಂದು ಶರೀರಕ್ಕೆ ಮಂಡಲವೆಂಬ ಈ ಇನ್ನೊಂದು ಶರೀರ ಸೇರಿಕೊಂಡದ್ದರಿಂದ ಇದ್ದ ಬುದ್ಧಿಯನ್ನು ಈ ಮಂಡಲಕ್ಕೆ ವರ್ಗಾಯಿಸಿ ತಾವು ಬರೀ ಬುರುಡೆಯಾಗುತ್ತಾರೋ—? ಅಥವಾ ಬಲವಾದ ಬುರುಡೆಯಾಗುತ್ತಾರೋ? ಎನ್ನುವುದನ್ನು, ಇವರನ್ನು ಕುರ್ಚಿಗೆ ತಂದು ತಳ್ಳಿ ಕೈತೊಳೆದುಕೊಂಡ ಜನ ತಾಳ್ಮೆಯಿಂದ ನೋಡಬೇಕು.

ಮಲ್ಲಂದೂರಿನಿಂದ ಕಾನೂರಿನವರೆಗೆ ಈ ಮಂಡಲ ಅವಲಂಬಿಸಿದ್ದು ಮಧ್ಯದಲ್ಲಿ "ರಸದ ಪದೂ"ಗಳೂ ಇದ್ದು ತಮ್ಮ ಕಾರ್ಯ ವಿಸ್ತಾರದ ಪ್ರಾಪ್ತಿಯಾಗಲಿ ಎಂದರೆ ಉಭಯ ಕುಶಲೋಪರಿಯಾದೀತೆ!?

—ಎಂಬಲ್ಲಿಗೆ ಗೋಪಾಲ (ರಾವ್)ರ ಕತೆ ಪ್ರಧಾನ ಪಟ್ಟದೊಂದಿಗೆ ಮಂಡಲದಲ್ಲಿ ಮುಂದುವರಿಯುವುದು....

● ಎಂ. ಐ. ಶ್ರೀನಿವಾಸಮೂರ್ತಿ, ಮೂಡುಬಾಗಿಲು.




ಗೃಹಕೃತ್ಯದ ಅಭಿವೃದ್ಧಿ, ಸಮಾಜ ಸೇವೆಗಳೆರಡನ್ನೂ ಒಟ್ಟಿಗೆ ಸಾಧಿಸಿ

# ಸಾರ್ಥಕ ಬದುಕು ಬಾಳಿದ ವಿಷ್ಣುಮೂರ್ತಿ ಭಟ್ಟರು

ದಿನಾಂಕ 8-5-87 ರಂದು ನಿಧನರಾದ ಶ್ರೀ ಜಮ್ಮಿಟಗೆ ವಿಷ್ಣುಮೂರ್ತಿ ಭಟ್ಟರದು ನಿಜವಾದ ಅರ್ಥದಲ್ಲಿ ಒಂದು ಸಾರ್ಥಕ ಜೀವನ. ಹರಿಹರಪುರದ ಜಮ್ಮಿಟಗೆ ಅಗ್ರಹಾರದಲ್ಲಿ ಮಧ್ಯಮ ಶ್ರೀಮಂತ ಕುಟುಂಬದಲ್ಲಿ ಅವರ ಜನನ. ಮಾಧ್ಯಮಿಕ ಶಾಲೆಯ ಮಟ್ಟಕ್ಕೆ ವಿದ್ಯಾಭ್ಯಾಸ ಸೀಮಿತ. ಆದರೆ ಇಂಗ್ಲಿಷ್, ಕನ್ನಡ ಭಾಷೆ, ಲೌಕಿಕ-ವ್ಯಾವಹಾರಿಕ-ರಾಜಕಾರಣ-ಧಾರ್ಮಿಕ-ಸಾಮಾಜಿಕ ಹೀಗೆ ಹಲವು ಹತ್ತು ಬಗೆಗಳಲ್ಲಿ ಅವರು ಗಳಿಸಿಕೊಂಡಿದ್ದ ತಿಳುವಳಿಕೆಯ ಮಟ್ಟ ತುಂಬ ದೊಡ್ಡದು.

ಗ್ರಾಮ ಪಂಚಾಯ್ತಿಯ ಅಧ್ಯಕ್ಷ, ವಿವಿಧೋದ್ದೇಶ ಸಹಕಾರ ಸಂಘದ ಸಂಸ್ಥಾಪಕ-ಅಧ್ಯಕ್ಷರಾಗಿ ಅವರು ಕಾರ್ಯ ನಿರ್ವಹಿಸುತ್ತಿದ್ದ ರೀತಿ, ಸಂಘ-ಸಂಸ್ಥೆಗಳನ್ನು ಕಟ್ಟಿ ಬೆಳೆಸುವುದರಲ್ಲಿ ಅವರಿಗೆ ಇದ್ದ ಪರಿಶ್ರಮ ಅನ್ಯಾದೃಶವಾದದ್ದು. ಹರಿಹರಪುರ ಪ್ರೌಢಶಾಲೆಯ ಸ್ಥಾಪನೆ, ಕೊಪ್ಪ ತಾ॥ ವ್ಯ॥ ಮಾ॥ ಸಹಕಾರ ಸಂಘ ಮತ್ತು ಜಮೀನು ಅಡಮಾನ ಸಹಕಾರ ಸಂಘ, ಶಿವಮೊಗ್ಗೆಯ ಮಲೆನಾಡು ಅಡಿಕೆ ಸಿಂಡಿಕೇಟ್-ಹೀಗೆ ಹಲವು ಸಂಘಗಳ ಅಭಿವೃದ್ಧಿಯಲ್ಲಿ ಅವರ ಪಾತ್ರ ಸಾಕಷ್ಟು ಇತ್ತು.

ಒಳ್ಳೆಯ ವ್ಯವಸಾಯಗಾರರಾಗಿದ್ದ ಅವರು ತಮ್ಮ ಗೃಹಕೃತ್ಯದ ಅಭಿವೃದ್ಧಿಯನ್ನೂ, ಸಮಾಜ ಸೇವೆಯನ್ನೂ ಒಟ್ಟಿಗೇ ಸಾಧಿಸಿದರು. ಹತ್ತಾರು ಮೈಲಿ ಪರಿಸರದಲ್ಲಿ ಕಷ್ಟ-ಸಮಸ್ಯೆಗಳಲ್ಲಿ ಸಿಲುಕಿಕೊಂಡವರಿಗೆ ಅವರಿಂದ ನಿಃಸ್ವಾರ್ಥ ಬೆಂಬಲ, ಪರಿಹಾರ ಸಿಗುತ್ತಿತ್ತು. ಹೀಗೆ ಸಹಾಯ, ಬೆಂಬಲ ನೀಡುವ ಮುನ್ನ ತುಂಬಾ ವಿಚಾರ ಮಾಡಿ ಹೆಜ್ಜೆ ಇಡುತ್ತಿದ್ದ ಅವರು ಒಮ್ಮೆ ಕೈ ಹಾಕಿದ ಮೇಲೆ ಎಂತಹ ಪ್ರಬಲ ವಿರೋಧ ಎದುರಾದರೂ ಹಿಂಜರಿಯದೆ ಅದನ್ನು ಪೂರೈಸಿಬಿಡುತ್ತಿದ್ದರು.

ಉತ್ತಮ ಹಳೆಯ ಮೌಲ್ಯಗಳೊಂದಿಗೆ ಆಧುನಿಕ ಮನೋಭಾವನೆಗಳನ್ನು ಹದವರಿತು ಸಂಯೋಜಿಸಿ, ತಮ್ಮ ಆಚಾರ-ವಿಚಾರಗಳನ್ನು ರೂಪಿಸಿ ಕೊಂಡಿದ್ದ ಶ್ರೀಯುತರು ತಮ್ಮ ನಂತರ ತಮ್ಮ ಪಾರ್ಥಿವ ಶರೀರದಿಂದಲೂ ಸಮಾಜಕ್ಕೆ ಉಪಯೋಗವಾಗಲೆಂದು ಮುಂದಾಲೋಚನೆಯಿಂದ ತಮ್ಮ ಕಣ್ಣುಗಳು, ಮೂತ್ರ ಪಿಂಡ ಮುಂತಾದ ಉಪಯುಕ್ತ ಅಂಗಗಳನ್ನು ದಾನವಾಗಿ ನೀಡಿರುವವರೆಂದರೆ ಅವರ ಬದುಕು ಎಷ್ಟು ಸಾರ್ಥಕ ಎಂಬುದು ಅರಿವಾಗುತ್ತದೆ.

● ಹರಿಹರಪುರ ಬಿ. ಸುಬ್ರಹ್ಮಣ್ಯಂ

ಪ್ರತಿ ವರ್ಷದಂತೆ ಶೃಂಗೇರಿ, ಕೊಪ್ಪಗಳಲ್ಲಿ

# ಕೈಗಾರಿಕಾ ವಿಚಾರ ಸಂಕಿರಣಗಳು

ಕೊಪ್ಪ: ಜಿಲ್ಲಾ ಕೈಗಾರಿಕಾ ಕೇಂದ್ರ ಮತ್ತು ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ (ಕೆ.ಎಸ್.ಎಫ್.ಸಿ.) ಇವುಗಳ ಸಂಯುಕ್ತ ಆಶ್ರಯದಲ್ಲಿ ಕೈಗಾರಿಕಾ ವಿಚಾರ ಸಂಕಿರಣ, ಸ್ವಯಂ ಉದ್ಯೋಗ ಯೋಜನೆಯ ಉದ್ಯಮಿಗಳು, ಕೈಗಾರಿಕೋದ್ಯಮದ ಉತ್ಸಾಹಿಗಳು ಹಾಗೂ ಅಧಿಕಾರಿಗಳ ನಡುವೆ ವಿಚಾರ ವಿನಿಮಯಗಳನ್ನೊಳಗೊಂಡ ಕಾರ್ಯಕ್ರಮ ಗಳು ಶೃಂಗೇರಿ ಮತ್ತು ಕೊಪ್ಪದಲ್ಲಿ ಈಚೆಗೆ ನಡೆದವು.

**ಕೊಪ್ಪ**

ಬಿ.ಜಿ. ಚಿದಂಬರ್ ಕಾರ್ಯಕ್ರಮ ಉದ್ಘಾಟಿಸಿದರು. ಜಿ.ಕೈ. ಕೇಂದ್ರದ ಜನರಲ್ ಮ್ಯಾನೇಜರ್ ಎಂ. ಮಾರಪ್ಪ ಅಧ್ಯಕ್ಷತೆ ವಹಿಸಿದ್ದರು. ಪಿ. ವಾಸುದೇವ್, ಕೆ.ಟಿ.ಸಿ. ಶರ್ಮ, ಮಂಜುನಾಥ ಶೆಟ್ಟಿ ಅತಿಥಿಗಳಾಗಿದ್ದರು.

ಮುಖ್ಯವಾಗಿ ಚರ್ಚಿತವಾದ ಅಂಶಗಳೆಂದರೆ,

1) ಪ್ರತಿ ತಾಲ್ಲೂಕಿನಲ್ಲೂ ಕೈಗಾರಿಕೆಗಳ ಸ್ಥಾಪನೆಗೆ ಅನುಕೂಲವಾಗುವಂತೆ ಕೈಗಾರಿಕಾ ಪ್ರದೇಶಗಳನ್ನು ಕಾದಿರಿಸಬೇಕು. ಖಾಸಗಿಯವರ ಭೂಮಿ ಯಾವುದಾದರೂ ಇದಕ್ಕೆ ಸೂಕ್ತ ಕಂಡಲ್ಲಿ ಅದನ್ನು ಪಡೆದುಕೊಂಡು ಬಳಸಿಕೊಳ್ಳಬೇಕು

2) ತಾಲ್ಲೂಕು ಅಥವಾ ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಅಗತ್ಯವಾದ ಮಾಹಿತಿಗಳನ್ನು ಜಿಲ್ಲಾ ಕೈಗಾರಿಕಾ ಕೇಂದ್ರವೇ ಸಂಗ್ರಹಿಸಿ ಉತ್ಸಾಹಿಗಳಿಗೆ ಒದಗಿಸಬೇಕು.

3) ಹಣಕಾಸಿನ ನೆರವು ಪಡೆಯುವುದೇ ದುಸ್ತರವಾಗಿದೆ. ಅದರ ಜೊತೆಗೆ ಪಂಚಾಯ್ತಿ ಅಥವಾ ಪುರಸಭೆಯ ಲೈಸೆನ್ಸ್, ವಿದ್ಯುಚ್ಛಕ್ತಿ ಸಂಪರ್ಕ ಪಡೆಯುವುದು— ಇವೆಲ್ಲ ಬಹು ದೊಡ್ಡ ತಡೆಗಳಾಗಿವೆ. ಇವನ್ನೆಲ್ಲ ಸುಸೂತ್ರಗೊಳಿಸಿ, ಕೈಗಾರಿಕೆ ಸ್ಥಾಪನೆಗೆ ನಿಜವಾದ ಅರ್ಥದಲ್ಲಿ ಉತ್ತೇಜನ ಕೊಡಬೇಕು.

4) ಚಿಕ್ಕಮಗಳೂರು ಜಿಲ್ಲೆಯಲ್ಲಿ ಚಿಕ್ಕಮಗಳೂರು ಮತ್ತು ಕಡೂರು ತಾ॥ಗಳನ್ನು ಮಾತ್ರ ಕೈಗಾರಿಕೆಯಲ್ಲಿ ಹಿಂದುಳಿದವುಗಳೆಂದು ಘೋಷಿಸಿ, ಏನೇನೂ ಕೈಗಾರಿಕೆಗಳಿಲ್ಲದ ಶೃಂಗೇರಿ, ನ ರಾ. ಪುರ, ಕೊಪ್ಪ, ಮೂಡಿಗೆರೆ ತಾ॥ಗಳಿಗೆ ಅನ್ಯಾಯ ಮಾಡಲಾಗಿದೆ.

ಕಾಫಿಯನ್ನು ಕೈಗಾರಿಕೆಯೆಂದು ಪರಿಗಣಿಸಿದರೂ ಈ ತಾಲ್ಲೂಕುಗಳಿಗಿಂತ ಚಿಕ್ಕಮಗಳೂರು ತಾ॥ನಲ್ಲೇ ಹೆಚ್ಚು ಕಾಫಿ ಬೆಳೆಯುತ್ತೆ. ಜಿಲ್ಲಾ ಕೇಂದ್ರ ಅಭಿವೃದ್ಧಿಯಾಗಲಿ ಎಂದು ಅಧಿಕಾರಿಗಳು, ಜಿಲ್ಲೆಯ ರಾಜಕೀಯ ಮುಖಂಡರು ಹೀಗೆ ಮಾಡಿರುವುದು ಪುನಃ ಕೈಗಾರಿಕಾ ವಿಕೇಂದ್ರೀಕರಣದ ನೀತಿಗೆ ವಿರುದ್ಧ ಮಾತ್ರವಲ್ಲದೆ, ಗ್ರಾಮೀಣ ಕೈಗಾರಿಕೆಗಳವರಿಗೆ ಮಾಡಿದ ಮಹಾ ದ್ರೋಹವಾಗಿದೆ. ಇದನ್ನು ಸರಿಪಡಿಸಲು ತಕ್ಕ ಕ್ರಮ ಕೈಗೊಳ್ಳಬೇಕು.

5) ಇವೇ ಸಲಹೆ-ಸೂಚನೆಗಳನ್ನು ಹಲವು ವರ್ಷಗಳಿಂದ ಪ್ರತಿ ವರ್ಷವೂ 'ವಿಚಾರ ಸಂಕಿರಣ'ವೆಂಬ ಈ ನಾಮಕಾವಾಸ್ತೆ ಕಾರ್ಯಕ್ರಮದಲ್ಲಿ ಕೊಡಲಾಗುತ್ತಿದೆ. ಆದರೆ ಅವನ್ನು ಕಾರ್ಯಗತಿಗೊಳಿಸುವ ದಿಕ್ಕಿನಲ್ಲಿ ಈವರೆಗೆ ಒಂದು ಹೆಜ್ಜೆಯನ್ನೂ ಇಟ್ಟಿಲ್ಲ. ಹೀಗಾದಲ್ಲಿ ಇಂಥ ಕಣ್ಣೊರೆಸುವ ಕಸರತ್ತು

(3ನೇ ಪುಟಕ್ಕೆ)

### ಓದುಗರ ಪತ್ರ

## ಬಾಲವಾಡಿ ತರಬೇತಾದವರ ರಾಜ್ಯ ಸಂಘದ ಚಿಕ್ಕಮಗಳೂರು ಜಿಲ್ಲಾ ಘಟಕ

ಅಖಿಲ ಕರ್ನಾಟಕ ಬಾಲವಾಡಿ ತರಬೇತಾದವರ ಸಂಘ (ರಿ), ಕರ್ಕಿ, ಹೊನ್ನಾವರ ತಾಲ್ಲೂಕು, ಇದರ ಚಿಕ್ಕಮಗಳೂರು ಜಿಲ್ಲಾ ಶಾಖೆಯ ಸಮಾವೇಶ ಮೇ 17ರಂದು ಶೃಂಗೇರಿಯಲ್ಲಿ ನಡೆಯಿತು. ರಾಜ್ಯ ಸಂಘದ ಅಧ್ಯಕ್ಷರಾದ ಶ್ರೀಮತಿ ಶಾರದಾ ಜೋಶಿ ಹಾಗೂ ಪ್ರಧಾನ ಕಾರ್ಯದರ್ಶಿ ಕು|| ವಿದ್ಯಾ ಹೆಗಡೆ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಈ ಸಭೆಯಲ್ಲಿ ಸಂಘ ಸ್ಥಾಪನೆಯ ಧ್ಯೇಯೋದ್ದೇಶಗಳು, ಕಾರ್ಯವಿಧಾನದ ಬಗ್ಗೆ ಚರ್ಚಿಸಿ, ಚಿಕ್ಕಮಗಳೂರು ಜಿಲ್ಲಾ ಬಾಲವಾಡಿ ತರಬೇತಾದವರ ಸಂಘ, ಶೃಂಗೇರಿ ಇದನ್ನು ರಾಜ್ಯ ಸಂಘದ ಅಧಿಕೃತ ಶಾಖೆಯೆಂದು ಘೋಷಿಸುವುದರ ಮೂಲಕ ಸಂಘದ ಕಾರ್ಯ ವ್ಯಾಪ್ತಿಯನ್ನು ವಿಸ್ತಾರಗೊಳಿಸಲಾಯ್ತು.

ಉತ್ತಮ ಮಟ್ಟದ ಪ್ರಾಥಮಿಕ ಶಿಕ್ಷಣದ ಧ್ಯೇಯೋದ್ದೇಶಕ್ಕಾಗಿ ಸರ್ಕಾರ ರೂಪಿಸಿರುವ ಮಕ್ಕಳ ಕಲ್ಯಾಣ ಯೋಜನೆಯನ್ವಯ ಬಾಲವಾಡಿ ತರಬೇತಿಯನ್ನು ಪಡೆದಿರುವ ಶಿಕ್ಷಕಿಯರನ್ನು ಸರ್ಕಾರವು ಪ್ರತಿಯೊಂದು ಪ್ರಾಥಮಿಕ ಶಾಲೆಗೊಂದರಂತೆ ಪೂರ್ವ ಪ್ರಾಥಮಿಕ ಕೇಂದ್ರಗಳನ್ನು ತೆರೆದು ಅಲ್ಲಿ ನೇಮಕ ಮಾಡಬೇಕಾದುದು ಹಾಗೂ ಹಾಲಿ ಇರುವ ಏಕೋಪಾಧ್ಯಾಯ ಶಾಲೆಗಳನ್ನೂ ಅರ್ಹ ಬಾಲವಾಡಿ ಶಿಕ್ಷಕಿಯರಿಂದ ಭರ್ತಿ ಮಾಡಬೇಕಾದುದು ಸರ್ಕಾರದ ಆದ್ಯ ಕರ್ತವ್ಯ. ಆದರೆ ಹೀಗೆ ಮಾಡದೆ ಕೇವಲ ತರಬೇತುದಾರರನ್ನು ತಯಾರು ಮಾಡಿ ಇನ್ನಷ್ಟು ನಿರುದ್ಯೋಗ ಸಮಸ್ಯೆಯನ್ನು ಸೃಷ್ಟಿಸುತ್ತಿರುವ ಸರ್ಕಾರದ ಈ ಕ್ರಮದಿಂದಾಗಿ ಉಂಟಾಗಿರುವ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಬಾಲವಾಡಿ ತರಬೇತಾದ ಶಿಕ್ಷಕಿಯರು ಸಂಘಟಿತರಾಗಿ ಈ ಅನ್ಯಾಯದ ವಿರುದ್ಧ ಹೋರಾಟಕ್ಕೆ ಪಣ ತೊಟ್ಟಿದ್ದಾರೆ.

ನ್ಯಾಯವಾದ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ತರಬೇತಾದ ಎಲ್ಲಾ ಶಿಕ್ಷಕಿಯರೂ ಕೂಡಲೇ ಸಂಘದಲ್ಲಿ ಸದಸ್ಯರಾಗಿ ಈ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕಾಗಿ ಈ ಮೂಲಕ ಕೋರಲಾಗಿದೆ.

ಅಲ್ಲದೆ, ಎಲ್ಲಾ ಸಮಾಜ ಬಾಂಧವರೂ ನಮ್ಮ ಈ ಕಾರ್ಯದಲ್ಲಿ ಸಹಕರಿಸಬೇಕೆಂದು ಕೋರುತ್ತೇವೆ. →

ಕೆ. ರಾಜಲಕ್ಷ್ಮಿ, ಅಧ್ಯಕ್ಷರು,
ಅಖಿಲ ಕರ್ನಾಟಕ ಬಾಲವಾಡಿ
ತರಬೇತಾದವರ ಸಂಘ,
ಚಿಕ್ಕಮಗಳೂರು ಜಿಲ್ಲಾ ಘಟಕ.

## ಹಿಂದುಳಿದ ವರ್ಗ, ಅಲ್ಪ ಸಂಖ್ಯಾತರಿಗೆ ವಾಹನ ಚಾಲನೆ ತರಬೇತಿಗೆ ಅರ್ಜಿ ಆಹ್ವಾನ

ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವತಿಯಿಂದ 'ಎ', 'ಬಿ', 'ಸಿ' ಮತ್ತು 'ಡಿ' ಗುಂಪುಗಳಿಗೆ ಸೇರಿದ ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ವಾಹನ ಚಾಲನೆ ತರಬೇತಿಗಾಗಿ ಚಿಕ್ಕಮಗಳೂರು ಜಿಲ್ಲೆಯ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ಸಾಲಿನಲ್ಲಿ ಆಟೋರಿಕ್ಷಾ ಚಾಲನೆ ತರಬೇತಿಗೆ 4, ಲಘು ವಾಹನ 4 ಮತ್ತು ಭಾರಿ ವಾಹನ ಚಾಲನೆ ತರಬೇತಿಗೆ 3 ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು. ಪ್ರಥಮ ಚಿಕಿತ್ಸೆ ಸರ್ಟಿಫಿಕೇಟ್ ಹೊಂದಿದವರಿಗೆ ಆದ್ಯತೆ ನೀಡಲಾಗುವುದು.

ಒಂದು ತಿಂಗಳ ಈ ತರಬೇತಿಯಲ್ಲಿ 200 ರೂ. ತರಬೇತಿ ಭತ್ಯೆ ನೀಡಲಾಗುವುದು.

ನಿಗದಿತ ಅರ್ಜಿಗಳನ್ನು ಚಿಕ್ಕಮಗಳೂರಿನಲ್ಲಿರುವ ನಿಗಮದ ಕಚೇರಿಯಿಂದ ಪಡೆದು ಅಗತ್ಯ ದಾಖಲೆಗಳೊಂದಿಗೆ 8.6.87ರೊಳಗೆ ತಲುಪುವಂತೆ ಕಳಿಸಬೇಕು.

## ಕೈಗಾರಿಕಾ ವಿಚಾರ ಸಂಕಿರಣಗಳು

(2ನೇ ಪುಟದಿಂದ)
ಮಾಡದಿರುವುದೊಳ್ಳೆಯದು.

(ವರದಿ : ಎಂ.ಆರ್. ಕಣ್ಣನ್)

**ಶೃಂಗೇರಿ**

ಕೆ. ವಿ. ರಾಮಪ್ಪಯ್ಯ ಕಾರ್ಯಕ್ರಮ ಉದ್ಘಾಟಿಸಿದರು ಎಂ. ಮಾರಪ್ಪ ಅಧ್ಯಕ್ಷತೆ ವಹಿಸಿದ್ದರು. ಮುಡುಬ ಸುಧಾಕರ ಹೆಗ್ಡೆ ಮುಖ್ಯ ಅತಿಥಿಯಾಗಿದ್ದರು.

ಬಿಸಿ ಬಿಸಿ ಚರ್ಚೆ ಹಾಗೂ ಸಂಬಂಧಪಟ್ಟ ಇಲಾಖೆಗಳನ್ನು ತರಾಟೆಗೆ ತೆಗೆದುಕೊಂಡ ಈ ಕಾರ್ಯಕ್ರಮದಲ್ಲಿ ಪ್ರಮುಖವಾಗಿ ಚರ್ಚಿತವಾದ ಅಂಶಗಳು:

1) ಈ ತಾಲ್ಲೂಕಿಗೆ ಅನ್ವಯವಾಗುವಂತೆ ಪರಿಸರ ಸಮೀಕ್ಷಿಸಿ, ಹೊಸ ಕೈಗಾರಿಕೆಗಳ ಸ್ಥಾಪನೆಯ ಸಾಧ್ಯತೆಗಳನ್ನು ಗುರುತಿಸಬೇಕು.

2) ಕೆ. ಎಸ್. ಎಫ್. ಸಿ. ಯವರು ಹಣಕಾಸು ನೆರವು ಒದಗಿಸಲು ಲಂಚ ಕೇಳುವುದು, ಅದಕ್ಕಾಗಿ ವೃಥಾ ಅಲೆಸುವುದು ಇತ್ಯಾದಿ ತಪ್ಪಬೇಕು (ಇಂಥ ವಿಚಾರಗಳ ಬಗ್ಗೆ ಈ ಸಂಸ್ಥೆಯ ಚಿಕ್ಕಮಗಳೂರು ಶಾಖೆ ಸಹಾಯಕ ಮ್ಯಾನೇಜರನ್ನು ಸಮಜಾಯಿಸಿ ಕೇಳಲಾಯಿತು.)

3) ಸ್ವಯಂ ಉದ್ಯೋಗ ಯೋಜನೆಯಲ್ಲಿ ಯೋಜನೆಗೆ ತಕ್ಕಷ್ಟು ಹಣ ಮಂಜೂರು ಮಾಡದಿರುವುದು, ಸಂದರ್ಶನದಲ್ಲಿ ಅಸಂಬದ್ಧ ಹಾಗೂ ಕ್ಷುಲ್ಲಕ ಪ್ರಶ್ನೆಗಳನ್ನು ಕೇಳುವುದು, ಮಂಜೂರಾದ ಸಾಲದಲ್ಲೂ ಬ್ಯಾಂಕಿನವರು ಕಡಿತ ಮಾಡುವುದು, ಅಗತ್ಯವಿಲ್ಲದ ರಿಕಾರ್ಡ್‌ಗಳನ್ನೆಲ್ಲ ಕೇಳುವುದು, ಕುಂಟುನೆಪ ಹೇಳಿ ಅಲೆಸುವುದು, ಇಷ್ಟು ಸಾಲದೆಂಬಂತೆ, ಅಲ್ಪ ಸ್ವಲ್ಪ ಮಾತ್ರ ಸಾಲ ಕೊಟ್ಟರೂ (ಯೋಜನೆಯ ಪೂರ್ಣ ಅಂದಾಜನ್ನು ಮಂಜೂರು ಮಾಡದೆ ಭಾಗಶಃ ಮಾತ್ರ ಮಾಡಿದ್ದಾಗ್ಯೂ) ಪಡೆದವರು ಇನ್ನೆಲ್ಲೂ ಉದ್ಯೋಗಕ್ಕೆ ಹೋಗದಂತೆ ಅಂಕಪಟ್ಟಿ, ಟಿ. ಸಿ. ಇತ್ಯಾದಿಗಳ ಮೂಲಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಇತ್ಯಾದಿಗಳ ಬಗ್ಗೆ ಸುದೀರ್ಘ ಮತ್ತು ಬಿಸಿ ಚರ್ಚೆಗಳು ನಡೆದವು.

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

### ತೀರ್ಥಹಳ್ಳಿ ಮ್ಯಾಮ್ಕೋಸ್‌ನಲ್ಲಿ ಕೊಕೋ ಖರೀದಿ

ತೀರ್ಥಹಳ್ಳಿ: ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದ ತೀರ್ಥಹಳ್ಳಿ ಶಾಖೆಯಲ್ಲಿ ತಾ|| 12-5-1987ರಿಂದ **ಪ್ರತಿ 15 ದಿನಗಳಿಗೊಮ್ಮೆ ಮಂಗಳವಾರ** ಕೊಕೋ ಖರೀದಿಯನ್ನು ಪ್ರಾರಂಭಿಸಲಾಗಿದೆ. 26-5-87ರಂದು ವ್ಯಾಪಾರ ನಡೆದಿದೆ. ಕೊಕೋ ಬೆಳೆಗಾರರು ಈ ಸೌಲಭ್ಯದ ಪ್ರಯೋಜನ ಪಡೆಯಬೇಕಾಗಿ ಕೋರಲಾಗಿದೆ.

**ತಿದ್ದುಪಡಿ**

ನಮ್ಮ 17-5-87ರ ಸಂಚಿಕೆಯ 'ಮಂತ್ರ ಮಾಂಗಲ್ಯ' ಎಂಬ ಲೇಖನದ 3ನೇ ಕಾಲಂನಲ್ಲಿ 'ಈ ಮಂತ್ರಗಳನ್ನು ಪುರೋಹಿತರೇ ಗಳಿಗೆಯಲ್ಲಿ ಆಹ್ವಾನಿಸುತ್ತಾರೆ' ಎಂಬ ಸಾಲುಗಳು ಅನಗತ್ಯವಾಗಿ ಸೇರಿಕೊಂಡಿವೆ. ಅದನ್ನು ಕೈಬಿಟ್ಟು, 'ಅಂತಹ ಶಕ್ತಿಗಳನ್ನು ವಧೂವರರು ವಿವಾಹದ ಶುಭ ಗಳಿಗೆಯಲ್ಲಿ ಆಹ್ವಾನಿಸುತ್ತಾರೆ. ಈ ಮಂತ್ರಗಳನ್ನು ಪುರೋಹಿತರೇ ಉಚ್ಚರಿಸಬೇಕೆಂಬ ನಿಯಮವಿಲ್ಲ....' ಎಂದು ಓದಿಕೊಳ್ಳುವುದು. —ಸಂ.

## ಹೊಲಿಗೆ ಡಿಪ್ಲೊಮಾ ಪರೀಕ್ಷೆಗಳು.

ಚಿಕ್ಕಮಗಳೂರು ನೆಹರು ಯುವ ಕೇಂದ್ರವು ತಾಂತ್ರಿಕ ಪರೀಕ್ಷಾ ಮಂಡಳಿಯ ಸಹಯೋಗದೊಡನೆ ನಡೆಸಲಿರುವ ಒಂದು ವರ್ಷದ ಹೊಲಿಗೆ ಡಿಪ್ಲೊಮಾ ಪ್ರಾಕ್ಟಿಕಲ್ ಪರೀಕ್ಷೆಯು ಜೂನ್ ನಿಂದ ಹಾಗೂ ಥಿಯರಿ ಪರೀಕ್ಷೆಗಳು ಜೂನ್ 6ನೇ ತಾರೀಖಿನಿಂದ ನಡೆಯಲಿವೆ. ಈಗಾಗಲೇ ಈ ಒಂದು ವರ್ಷದ ಡಿಪ್ಲೊಮಾ ಪರೀಕ್ಷೆಗೆ ಹೆಸರನ್ನು ನೊಂದಾಯಿಸಿರುವ ಅಭ್ಯರ್ಥಿಗಳಿಗೆ ನೆಹರು ಯುವ ಕೇಂದ್ರ ಪರೀಕ್ಷಾ ಕೇಂದ್ರವಾಗಿರುತ್ತದೆ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಯುವಜನ ಸಂಯೋಜಕರು, ನೆಹರು ಯುವಕ ಕೇಂದ್ರ, ಚಿಕ್ಕಮಗಳೂರು, ಇವರಿಂದ ಪಡೆಯಬಹುದು.

## ಎಸ್ಸೆಸ್ಸೆಲ್ಸಿ : ಕೊಪ್ಪ ಕಾನ್ವೆಂಟ್‌ನಲ್ಲಿ ಶೇ. 100

ಕೊಪ್ಪ: ಈ ಬಾರಿಯ ಎಸ್ಸೆಸ್ಸೆಲ್ಸಿ ಪರೀಕ್ಷೆಗಳಲ್ಲಿ ಇಲ್ಲಿನ ಸಂತ ಜೋಸೆಫ್ ಕಾನ್ವೆಂಟ್ ಪ್ರೌಢಶಾಲೆಯಲ್ಲಿ ಪರೀಕ್ಷೆಗೆ ಕುಳಿತಿದ್ದ 67 ಮಕ್ಕಳಲ್ಲಿ ಎಲ್ಲರೂ ತೇರ್ಗಡೆಯಾಗಿ 'ನೂರಕ್ಕೆ ನೂರು' ಫಲಿತಾಂಶ ಬಂದಿರುವುದಾಗಿ ಮುಖ್ಯೋಪಾಧ್ಯಾಯಿನಿಯವರು ತಿಳಿಸಿದ್ದಾರೆ. 15 ಮಕ್ಕಳು ಪ್ರಥಮ ದರ್ಜೆ ಪಡೆದಿದ್ದಾರೆ.

ಶಾಲೆಯ ಅಧ್ಯಾಪಕ ವರ್ಗಕ್ಕೂ ಎಲ್ಲ ಮಕ್ಕಳಿಗೂ ಅಭಿನಂದನೆಗಳು.

**ಶೃಂಗೇರಿ**

ಶೃಂಗೇರಿಯ ಬಾಲಿಕಾ ಪ್ರೌಢಶಾಲೆಯಲ್ಲಿ ಶೇ. 92 (72 ರಲ್ಲಿ 66) ತೇರ್ಗಡೆಯಾಗಿದ್ದು 22 ಜನ ಮೊದಲ ದರ್ಜೆ ಪಡೆದಿದ್ದಾರೆ.

ಶೃಂಗೇರಿಯ ಸರ್ಕಾರಿ ಪ್ರೌಢಶಾಲೆಗೆ ಶೇ. 61 ಮತ್ತು ಕಿಗ್ಗದ ಪ್ರೌಢಶಾಲೆಗೆ ಶೇ. 71 ಫಲಿತಾಂಶ ಬಂದಿರುವುದಾಗಿ ತಿಳಿದು ಬಂದಿದೆ.

## ಶಿವಮೊಗ್ಗ ಅಡಿಕೆ ಧಾರಣೆ

ತಾ|| 27.5.1987

ಸರಕು : 4615 – 5329
ಬೆಟ್ಟೆ : 3050 – 3759
ಗೊರಬಲು : 932 – 1116

## ಸ್ವಯಂ ಉದ್ಯೋಗಕ್ಕೆ ಅರ್ಜಿ ಆಹ್ವಾನ

ಭಾರತ ಸರ್ಕಾರ 87–88ನೇ ಸಾಲಿಗೆ ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವಯಂ ಉದ್ಯೋಗ ಕಲ್ಪಿಸುವ ಯೋಜನೆಯನ್ನು ನವೀಕರಿಸಿ ಮಂಜೂರಾತಿ ನೀಡಿದೆ. 10ನೇ ದರ್ಜೆಯಲ್ಲಿ ಉತ್ತೀರ್ಣರಾದ ಮತ್ತು ಅದಕ್ಕಿಂತಲೂ ಮೇಲ್ಪರಗತಿಯ ವಿದ್ಯಾವಂತ ಯುವಕರಿಗೆ ಉದ್ಯೋಗ ದೊರಕಿಸುವುದು ಈ ಯೋಜನೆಯ ಉದ್ದೇಶವಾಗಿದೆ. ವಯೋಮಿತಿ ಕನಿಷ್ಠ 18 ವರ್ಷ, ಗರಿಷ್ಠ 35 ವರ್ಷ ಸ್ತ್ರೀಯರಿಗೆ ಮತ್ತು ತಾಂತ್ರಿಕ ಶಿಕ್ಷಣ ಪಡೆದವರಿಗೆ ಆದ್ಯತೆ ನೀಡಲಾಗುವುದು. ಐ. ಟಿ. ಐ. ತೇರ್ಗಡೆಯಾದ ಯುವಕರೂ ಸಹ ಈ ಯೋಜನೆಯನ್ವಯ ಅರ್ಜಿ ಹಾಕಲು ಅರ್ಹರಾಗಿರುತ್ತಾರೆ.

ಈ ಯೋಜನೆಯ ಪ್ರಕಾರ ಅರ್ಹರಾದ ಅರ್ಜಿದಾರರಿಗೆ ಕೈಗಾರಿಕೆಯನ್ನು ಸ್ಥಾಪಿಸಲು 35,000 ರೂ., ಸೇವಾ ಉದ್ಯಮಗಳಿಗೆ 25,000 ರೂ. ಮತ್ತು ವ್ಯಾಪಾರಕ್ಕೆ 15,000 ರೂ.ಗಳಿಗೆ ಹೆಚ್ಚಿಲ್ಲದಂತೆ ಕಾಂಪೋಜಿಟ್ ಸಾಲ ಒದಗಿಸಲಾಗುವುದು. ಇದರಲ್ಲಿ ಶೇ. 25 ಭಾಗ ಸರ್ಕಾರದ ಸಬ್ಸಿಡಿ ಆಗಿರುತ್ತದೆ. ಅರ್ಹರಾದ ಅಭ್ಯರ್ಥಿಗಳು ನಿಗದಿತ ನಮೂನೆಯ ಅರ್ಜಿಯನ್ನು ದ್ವಿಪ್ರತಿಯಲ್ಲಿ ಭರ್ತಿ ಮಾಡಿ ತಾಲ್ಲೂಕಿನ ಕೈಗಾರಿಕಾ ವಿಸ್ತರಣಾಧಿಕಾರಿಗಳಿಗೆ ತಾ|| 15–6–87ರೊಳಗಾಗಿ ಸಲ್ಲಿಸಬೇಕು. ಅದೇ ಕಚೇರಿಯಲ್ಲಿ ನಿಗದಿತ ನಮೂನೆಯ ಖಾಲಿ ಫಾರಂಗಳು ದೊರೆಯುತ್ತವೆ.

ಅರ್ಜಿಯೊಡನೆ ವಯಸ್ಸು, ವಿದ್ಯಾರ್ಹತೆ, ಜಾತಿ, ತಂದೆ/ಪೋಷಕರ ವಾರ್ಷಿಕ ವರಮಾನ ಹಾಗೂ ಚಟುವಟಿಕೆಗಳನ್ನು ಪ್ರಾರಂಭಿಸಲು ಬೇಕಾಗುವ ಯಂತ್ರೋಪಕರಣಗಳು, ಅಂದಾಜು ಹಣ ಮೊದಲಾದ ವಿವರ ಹಾಗೂ ಪ್ರಮಾಣ ಪತ್ರಗಳನ್ನು ಲಗತ್ತಿಸಬೇಕು. ವಾರ್ಷಿಕ ವರಮಾನವು ಕುಟುಂಬದ ಎಲ್ಲಾ ಮೂಲಗಳಿಂದ ರೂ. 10,000 ಕ್ಕೆ ಮೀರಿರಬಾರದು. ಈ ಬಗ್ಗೆ 5 ರೂ. ಛಾಪಾ ಕಾಗದದಲ್ಲಿ ಪ್ರಮಾಣ ಪತ್ರವನ್ನು ಲಗತ್ತಿಸುವುದು. ಅಭ್ಯರ್ಥಿಯು ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟಿಗೆ ಸೇರಿದ್ದರೆ ರೂ. 5ರ ಛಾಪಾ ಕಾಗದದಲ್ಲಿ ಪ್ರಮಾಣ ಪತ್ರವನ್ನು ಲಗತ್ತಿಸುವುದು. ಎಲ್ಲಾ ವಿಧದಲ್ಲಿಯೂ ಪೂರ್ಣವಾಗಿಲ್ಲದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಉದ್ಯೋಗ ವಿನಿಮಯ ಇಲಾಖೆಯಲ್ಲಿ ಕಾದಿರಿಸಲಾದ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಸ್ವಯಂ ಉದ್ಯೋಗ ಯೋಜನೆಯನ್ವಯ ಚಟುವಟಿಕೆಗಳನ್ನು ಪ್ರಾರಂಭಿಸಲು ಇಷ್ಟವುಳ್ಳವರಾದರೆ ಅರ್ಜಿ ಕೊಡಲು ನಿಗದಿಯಾಗಿರುವ ಕೊನೆಯ ತಾರೀಖಿನೊಳಗಾಗಿ ಅವರ ಅರ್ಜಿಗಳನ್ನು ಉದ್ಯೋಗ ವಿನಿಮಯ ಇಲಾಖೆಯ ಮುಖೇನ ಕಳುಹಿಸಿ ಕೊಡತಕ್ಕದ್ದು. ಈ ಹಿಂದೆಯೇ ಸಲ್ಲಿಸಿದ್ದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ವಿವರಗಳನ್ನು ಇಲಾಖೆಯ ತಾಲ್ಲೂಕು ವಿಸ್ತರಣಾಧಿಕಾರಿಗಳಿಂದ ಪಡೆಯಬಹುದು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸೀಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.